# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 455
ಸದಸ್ಯರ ಹೆಸರು : ಡಾ. ವೈ.ಎ. ನಾರಾಯಣಸ್ವಾಮಿ,
ಉತ್ತರಿಸುವ ಸಚಿವರು : ಉಪ ಮುಖ್ಯಮಂತ್ರಿಗಳು ಹಾಗೂ ಸಾರಿಗೆ ಸಚಿವರು
ಉತ್ತರಿಸುವ ದಿನಾಂಕ : 06-03-2020

| ಕ್ರಸ | ಪ್ರಶ್ನೆ | ಉತ್ತರ |
|---|---|---|
| ಅ) | ಬೆಂಗಳೂರಿನಲ್ಲಿ ಪರಿಸರ ಸ್ನೇಹಿ ಎಲೆಕ್ಟ್ರಿಕ್ ಬಸ್ (ಇ-ಬಸ್) ಅಳವಡಿಕೆ ವಿಳಂಬಕ್ಕೆ ಕಾರಣ ಏನು; | ಕೇಂದ್ರ ಸರ್ಕಾರವು, ಭಾರಿ ಕೈಗಾರಿಕಾ ಇಲಾಖೆಯ ಮುಖಾಂತರ OPEX ಮಾದರಿಯಲ್ಲಿ ಎಲೆಕ್ಟ್ರಿಕ್ ಬಸ್ಸುಗಳನ್ನು ನಿಯೋಜಿಸಲು ವಿವಿಧ ಸಂಸ್ಥೆಗಳಿಗೆ ಆರ್ಥಿಕ ಪ್ರೋತ್ಸಾಹವನ್ನು ಒದಗಿಸಲು ಫೇಮ್-2 ಬೇಡಿಕೆ ಯೋಜನೆಯನ್ನು ಪ್ರಾರಂಭಿಸಿದ್ದು, ಸದರಿ ಯೋಜನೆಯಡಿಯಲ್ಲಿ ಬೆಂ.ಮ.ಸಾ.ಸಂಸ್ಥೆಗೆ 300 ಎಲೆಕ್ಟ್ರಿಕ್ ಬಸ್ಸುಗಳನ್ನು ಆಚರಣಾ ವೆಚ್ಚದ ಆಧಾರದ ಮೇಲೆ ಮಂಜೂರಾತಿಯನ್ನು ನೀಡಿರುತ್ತಾರೆ.<br><br>300 ಹವಾನಿಯಂತ್ರಿತ 12 ಮೀ. ಎಲೆಕ್ಟ್ರಿಕ್ ಬಸ್ಸುಗಳನ್ನು ಆಚರಣಾ ವೆಚ್ಚದ ಆಧಾರದ ಮೇಲೆ ಫೇಮ್-2 ಯೋಜನೆಯಡಿಯಲ್ಲಿ ಆಚರಣೆ ಮಾಡಲು ಕ.ರಾ.ರ.ಸಾ.ಸಂಸ್ಥೆಯು ಟೆಂಡರ್ ಸಂಖ್ಯೆ-ಟಿ-118 ಅನ್ನು ದಿನಾಂಕ.18.09.2019 ರಂದು ಆಹ್ವಾನಿಸಿದ್ದು, E-procurement portal ನಲ್ಲಿ ತಾಂತ್ರಿಕ ದೋಷಗಳು ಉಂಟಾದ ಹಿನ್ನಲೆಯಲ್ಲಿ ಟೆಂಡರ್ ಸಲ್ಲಿಸುವ ಕೊನೆ ದಿನಾಂಕವನ್ನು 18.11.2019 ರವರೆಗೆ ವಿಸ್ತರಿಸಲಾಗಿರುತ್ತದೆ. ಟೆಂಡರ್ ಪ್ರಕ್ರಿಯೆಯಲ್ಲಿ ಯಶಸ್ವಿಯಾದ ಬಿಡ್‌ದಾರರೊಂದಿಗೆ ಸಂಧಾನವನ್ನು ನಡೆಸಲಾಗಿ ದರಗಳನ್ನು ಕಡಿಮೆ ಮಾಡಲು ಸಾಧ್ಯವಿಲ್ಲವೆಂದು ತಿಳಿಸಿದ ಹಿನ್ನೆಲೆಯಲ್ಲಿ ಟೆಂಡರ್ ಷರತ್ತುಗಳನ್ನು ಸಡಿಲಗೊಳಿಸಿ ದಿನಾಂಕ 23.01.2020 ರಂದು ಮರುಟೆಂಡರ್ (ಅಲ್ಪಾವಧಿ) ಅನ್ನು ಆಹ್ವಾನಿಸಲಾಗಿರುತ್ತದೆ. ಟೆಂಡರ್ ಸಲ್ಲಿಸಲು 05.03.2020 ಅಂತಿಮ ದಿನಾಂಕವಾಗಿರುತ್ತದೆ.<br><br>ಇದಲ್ಲದೇ ಬೆಂಗಳೂರು ಸ್ಮಾರ್ಟ್ ಸಿಟಿ ಯೋಜನೆ ಅಡಿಯಲ್ಲಿ 90 ಹವಾನಿಯಂತ್ರಣ ರಹಿತ 9 ಮೀಟರ್ ಎಲೆಕ್ಟ್ರಿಕ್ ಬಸ್ಸುಗಳನ್ನು ಮೆಟ್ರೋ ಫೀಡರ್ ಸೇವೆಗಳ Last Mile Connectivity ಗಾಗಿ ಆಚರಣೆ ಮಾಡಲು ದಿನಾಂಕ 3.2.2020 ರಂದು ಟೆಂಡರ್ ಆಹ್ವಾನಿಸಿದ್ದು, 04.03.2020 ರಂದು ಟೆಂಡರ್ ಸಲ್ಲಿಸಲು ಅಂತಿಮ ದಿನಾಂಕವಾಗಿರುತ್ತದೆ.<br><br>ಮೇಲೆ ವಿವರಿಸಿರುವಂತೆ ಬೆಂಗಳೂರು ನಗರದಲ್ಲಿ ಪರಿಸರ ಸ್ನೇಹಿ ಎಲೆಕ್ಟ್ರಿಕ್ ಬಸ್ (ಇ-ಬಸ್) ಅಳವಡಿಸಲು ಕ್ರಮವಹಿಸಲಾಗುತ್ತಿದೆ. |

| | | |
|---|---|---|
| ಆ) | ಎಲೆಕ್ಟ್ರಿಕ್ ಬಸ್‌ಗಳ ಸಂಚಾರಕ್ಕೆ ಸರ್ಕಾರ ಯಾವ ಕ್ರಮ ಕೈಗೊಂಡಿದೆ; | ಕೇಂದ್ರ ಸರ್ಕಾರದ ಫೇಮ್-2 ಯೋಜನೆ ಅಡಿಯಲ್ಲಿ 300 ಹವಾನಿಯಂತ್ರಿತ 12 ಮೀಟರ್ ಹಾಗೂ ಬೆಂಗಳೂರು ಸ್ಮಾರ್ಟ್ ಯೋಜನೆ ಅಡಿಯಲ್ಲಿ 90 ಹವಾನಿಯಂತ್ರಣ ರಹಿತ 9 ಮೀಟರ್ ಬಸ್‌ಗಳನ್ನು ಕಾರ್ಯಾಚರಣೆಗೆ ಪಡೆಯುವ ಟೆಂಡರ್ ಪ್ರಕ್ರಿಯೆ ಜಾರಿಯಲ್ಲಿರುತ್ತದೆ. |
| ಇ) | ಇ-ಬಸ್‌ಗಳ ಸಂಚಾರ ಮತ್ತು ನಿರ್ವಹಣೆಗೆ ಸೂಕ್ತ ಕ್ರಮ ಕೈಗೊಂಡಿದೆಯೇ; | ಟೆಂಡರ್ ಪ್ರಕ್ರಿಯೆ ಪೂರ್ಣಗೊಂಡ ನಂತರ ಎಲೆಕ್ಟ್ರಿಕ್ ಬಸ್ಸುಗಳನ್ನು ಕಾರ್ಯಾಚರಿಸಲು ಕ್ರಮಕೈಗೊಳ್ಳಲಾಗುವುದು. ಎಲೆಕ್ಟ್ರಿಕ್ ಬಸ್ಸುಗಳನ್ನು ಒಟ್ಟು ವೆಚ್ಚದ ಆಧಾರದ ಮೇಲೆ (Gross Cost Contract) ಆಚರಣೆ ಮಾಡಲು ಟೆಂಡರ್ ಆಹ್ವಾನಿಸಿದ್ದು, ಅದರಂತೆ ವಾಹನಗಳ ನಿರ್ವಹಣೆಯನ್ನು ಎಲೆಕ್ಟ್ರಿಕ್ ಬಸ್ಸುಗಳ ಕಂಪನಿಯವರು ನಿರ್ವಹಿಸುತ್ತಾರೆ. ಅದಕ್ಕೆ ಅವಶ್ಯವಿರುವ ಅಗತ್ಯ ಮೂಲಭೂತ ಸೌಕರ್ಯಗಳನ್ನು ಸ್ಥಾಪಿಸಲು ಸಂಸ್ಥೆಯು ಘಟಕಗಳನ್ನು ಒದಗಿಸಬೇಕಾಗಿರುತ್ತದೆ. |
| ಈ) | ಹೌದಾದರೆ, ಅದರ ವಿವರ ನೀಡುವುದು ಇಲ್ಲವಾದರೆ ಕಾರಣವೇನು? | 390 ಎಲೆಕ್ಟ್ರಿಕ್ ಬಸ್‌ಗಳನ್ನು ನಾಲ್ಕು ಘಟಕಗಳಿಂದ ಕಾರ್ಯಾಚರಣೆಗೊಳಿಸಲು ಯೋಜನೆ ರೂಪಿಸಲಾಗಿದೆ ಹಾಗೂ ಪ್ರಸ್ತಾಪಿತ ಮಾರ್ಗಗಳನ್ನು ಸಹ ಗುರುತಿಸಲಾಗಿರುತ್ತದೆ. |

ಸಂಖ್ಯೆ: ಟಿಡಿ 34 ಟಿಸಿಕ್ಯೂ 2020

(ಲಕ್ಷ್ಮಣ ಸಂಗಪ್ಪ ಸವದಿ)
ಉಪ ಮುಖ್ಯಮಂತ್ರಿಗಳು ಹಾಗೂ
ಸಾರಿಗೆ ಸಚಿವರು